


# ಜ್ಯೋತಿಷ ಮಿತ್ರ

## ಆನ್‌ಲೈನ್ ದಿನಪತ್ರಿಕೆ

www.jyothishamithra.com

ಸಂಚಿಕೆ : 1011   02-06-2021  ಬುಧವಾರ

ಪ್ಲವಸಂವತ್ಸರ ಉತ್ತರಾಯಣ ವಸಂತಋತು
ವೈಶಾಖಮಾಸ ಕೃಷ್ಣಪಕ್ಷ

| ನಿತ್ಯ ಪಂಚಾಂಗ | ಸುಜ್ಞಾನ |
|---|---|
| ತಿಥಿ : ಅಷ್ಟಮಿ (ಗಂಟೆ 25.12ರ ವರೆಗೆ)<br>ನಕ್ಷತ್ರ : ಶತಭಿಷಾ (ಗಂಟೆ 16.58ರ ವರೆಗೆ)<br>ರಾಹುಕಾಲ : (ಗಂಟೆ 12.28 PM - 02.05 PM ವರೆಗೆ)<br>ಗುಳಿಕಕಾಲ : (ಗಂಟೆ 10.52 AM - 12.28 PM ವರೆಗೆ) | ಹಣ ಇಲ್ಲದವರನ್ನು ಯಾರೂ ಅರಿಯಲಾರರು; ಹಣ ಹೆಚ್ಚಾಗಿ ಇರುವವರು ತಮ್ಮನ್ನು ತಾವೇ ಅರಿಯಲಾರರು. |

# ಜಾತಕ ವಿಮರ್ಶೆ

# ಸಂತಾನ ವಿಚಾರ



**ಜನ್ಮ ದಿನಾಂಕ : 30-03-1983 ಸಮಯ : 09.45 PM ಸ್ಥಳ : ಬೆಂಗಳೂರು**

| | | | |
|---|---|---|---|
| ರವಿ<br>ಬುಧ | ಕುಜ<br>ಶುಕ್ರ | | ರಾಹು |
| | **ರಾಶಿ ಕುಂಡಲಿ** | | |
| | | | |
| ಕೇತು | ಲಗ್ನ<br>ವ.ಗುರು | ಶನಿ<br>ಚಂದ್ರ | |

ಇದು ವೃಷಭ ರಾಶಿ, ವೃಶ್ಚಿಕ ಲಗ್ನದ ಪುರುಷ ಜಾತಕ.ಸಂತಾನ ಸ್ಥಾನವಾದ ಪಂಚಮದಲ್ಲಿ ಅಗ್ನಿಗ್ರಹನಾದ ರವಿಯೊಂದಿಗೆ ಅಷ್ಟಮಾಧಿಪತಿ ಬುಧ ಸ್ಥಿತನಾಗಿರುವನು. ಬುಧನಿಗೆ ನೀಚಭಂಗ ಯೋಗವಿದ್ದರೂ ಅಷ್ಟಮಾಧಿಪತಿ ಯಾಗಿರುವುದು ಶುಭವಲ್ಲ. ಪಂಚಮಮಾಧಿಪತಿ ಹಾಗೂ ಪುತ್ರಕಾರಕನಾದ ಗುರುವು ಲಗ್ನದಲ್ಲಿ ಸ್ಥಿತನಾಗಿರುವುದು ಶುಭವಾಗಿದ್ದರೂ, ಗುರುವಿಗಿರುವ ಪಾಪಕರ್ತರೀ ಯೋಗ,ಕುಜನ ದೃಷ್ಟಿ ಮತ್ತು ಅಷ್ಟಮಾಧಿಪತಿಯ ನಕ್ಷತ್ರದಲ್ಲಿ ಸ್ಥಿತನಾಗಿರುವುದು ಶುಭವಲ್ಲ.

ಪಂಚಮದಿಂದ ಪಂಚಮಾಧಿಪತಿ ಚಂದ್ರನು ಅಷ್ಟಮದಲ್ಲಿ ದುಃಖಕಾರಕನಾದ ಶನಿಯೊಂದಿಗೆ ಸ್ಥಿತನಾಗಿರುವನು. ಚಂದ್ರ - ಶನಿಯನ್ನು ಆಘಾತ ಕಾರಕನಾದ ಕುಜನು ವೀಕ್ಷಿಸುತ್ತಿರುವನು.

| | | | |
|---|---|---|---|
| | ಕುಜ | ಕೇತು | |
| | ನವಾಂಶ ಕುಂಡಲಿ | | ಲಗ್ನ |
| ಬುಧ | | | |
| ವ.ಗುರು<br>ಶನಿ ಚಂದ್ರ | ರಾಹು<br>ರವಿ | | ಶುಕ್ರ |

ನವಾಂಶ ಕುಂಡಲಿಯಲ್ಲಿ ಲಗ್ನದಿಂದ ಪಂಚಮದಲ್ಲಿ ಪಾಪಗ್ರಹರಾದ ರವಿ-ರಾಹು ಸ್ಥಿತರಾಗಿರುವರು. ಪಂಚಮದ ರಾಹು ನಾಗದೋಷವನ್ನು ಸೂಚಿಸುತ್ತಾನೆ. ರಾಹು ಮತ್ತು ರವಿಯನ್ನು ಕುಜನು ವೀಕ್ಷಿಸುವುದು ಸಂತಾನಕ್ಕೆ ಪ್ರಬಲ ದೋಷವಾಗಿರುತ್ತದೆ.ಪಂಚಮವು ಪೂರ್ವಪುಣ್ಯ ಸ್ಥಾನವಾಗಿದೆ. “ ಅಸುತೋ ಧನವರ್ಜಿತಸ್ತ್ರೀಕೋಣೆ ” ಎಂದು ಬೃಹಜ್ಜಾತಕದಲ್ಲಿ

ಹೇಳಿದಂತೆ ರವಿಯು ಪಂಚಮದಲ್ಲಿರುವಾಗ ಜಾತಕನಿಗೆ ಸಂತಾನ, ಸಂಪತ್ತುಗಳಿರುವುದಿಲ್ಲ.



ರಾಶಿ ಕುಂಡಲಿಯ ಪಂಚಮದಲ್ಲಿ ರವಿ ಹಾಗೂ ಅಷ್ಟಮಾಧಿಪತಿ ಬುಧನಿರುವುದು. ಪುತ್ರಕಾರಕ ಹಾಗೂ

ಪಂಚಮಾಧಿಪತಿ ಗುರು ಪಾಪಕರ್ತರೀ ಯೋಗಕ್ಕೊಳಗಾಗಿರುವುದು. ಅಷ್ಟೇ ಅಲ್ಲದೇ ಗುರು ಅಷ್ಟಮಾಧಿಪತಿಯ ನಕ್ಷತ್ರದಲ್ಲಿ ಸ್ಥಿತನಾಗಿ ಕುಜನಿಂದ ದೃಷ್ಟನಾಗಿರುವುದು. ನವಾಂಶ ಕುಂಡಲಿಯಲ್ಲಿ ಪಂಚಮದಲ್ಲಿ ರವಿ-ರಾಹು ಇರುವುದು. ಪುತ್ರಕಾರಕನಾದ ಗುರು ಶತ್ರು ಸ್ಥಾನದಲ್ಲಿ ಶನಿಯೊಂದಿಗೆ ಸ್ಥಿತನಾಗಿರುವುದರಿಂದ ಈ ಜಾತಕನಿಗೆ ಸಂತಾನಯೋಗ ಇರುವುದಿಲ್ಲ.



# ಬಣ್ಣಗಳ ಗುಣಗಳು

ವಿಶ್ವವು ತ್ರಿಗುಣಾತ್ಮಕವಾದುದು. ತ್ರಿಗುಣಗಳೆಂದರೆ ಸತ್ತ್ವಗುಣ, ರಜೋಗುಣ ಮತ್ತು ತಮೋಗುಣ.

ಮನಸ್ಸು ಪ್ರಸನ್ನವಾಗಿರುವುದು, ಸತ್ಯ, ನ್ಯಾಯ ಮಾರ್ಗದಲ್ಲಿ ಜೀವನ,ಯಾವುದರಲ್ಲೂ ಅತಿಯಾದ ಆಸೆ ಇಲ್ಲದೇ ಇರುವುದು. ಇಂದ್ರಿಯಗಳು ಶಾಂತವಾಗುವುದು. ದೇಹವು ನಿರ್ಭೀತವಾಗುವುದು. ಇವು ಸತ್ತ್ವಗುಣವನ್ನು ತೋರಿಸುತ್ತದೆ.

ಲೌಕಿಕ ಜೀವನದಲ್ಲಿ ಆಸಕ್ತಿ ಹೆಚ್ಚಾಗುವುದು. ನಾನು

ನನ್ನದು ಎಂಬ ಸ್ವಾರ್ಥ, ಹಣ-ಸಂಪತ್ತು ಗಳಿಸಬೇಕೆಂಬ ಆಸೆ. ಕಾಮುಕತನ, ಮೋಜು – ಮಸ್ತಿ. ಇವು ರಜೋಗುಣವನ್ನು ತೋರಿಸುತ್ತದೆ.

ಮನಸ್ಸು ಬರಿದಾಗಿರುವುದು, ಅಜ್ಞಾನ ವಿಷಾದಗಳು ಹೆಚ್ಚಿಗಿರುವುದು, ಅನಾರೋಗ್ಯ, ಋಣಾತ್ಮಕವಾಗಿ ಚಿಂತಿಸುವುದು. ವಾಮಮಾರ್ಗದಲ್ಲಿ ಜೀವಿಸುವುದು, ಸಾಲ ಹೆಚ್ಚಾಗುವುದು, ದುಶ್ಚಟಗಳಲ್ಲಿ ತೊಡಗಿಸಿ ಕೊಳ್ಳುವುದು.ಇವು ತಮೋಗುಣವನ್ನು ತೋರಿಸುತ್ತದೆ.

ಯಾವ ಬಣ್ಣ ಯಾವ ಗುಣವನ್ನು ಹೊಂದಿದೆ ಎಂಬುವುದನ್ನು ತಿಳಿದುಕೊಳ್ಳೋಣ...

**ಸಾತ್ತ್ವಿಕ ಬಣ್ಣಗಳು :** ಬಿಳಿ, ಬಂಗಾರದ ವರ್ಣ, ನೇರಳೆ ಮತ್ತು ನೀಲಿ ಇವು ಸಂತಸ, ಪವಿತ್ರ, ಹಾಗೂ ಪ್ರಶಾಂತ ಮನೋಭಾವವನ್ನುಂಟು ಮಾಡುತ್ತವೆ.

**ರಾಜಸಿಕ ಬಣ್ಣಗಳು :** ಹಳದಿ, ಕಿತ್ತಳೆ, ಕೆಂಪು

ಹಾಗೂ ಕಡುನೇರಳೆ ವರ್ಣಗಳು ಇವು ಮನಸ್ಸನ್ನು ಉತ್ತೇಜಿಸುತ್ತವೆ.

**ತಾಮಸಿಕ ಬಣ್ಣಗಳು :** ಕಪ್ಪು, ಬೂದು ಹಾಗೂ ಕಂದು ಬಣ್ಣಗಳು, ಇವು ಆಲಸ್ಯ, ಜಡತ್ವ, ಋಣಾತ್ಮಕ ಗುಣಗಳನ್ನು ಹೊಂದಿದೆ.




ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ
ಗೌರವ ಸಂಪಾದಕರು : ಜೀವನ್ ಉಳ್ಳಾಲ್
ಸಂಪಾದಕರು : ಶ್ರೀಷ ಎಸ್.
ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.
PH : 9986671473 / 9535283535
jmonline@gmail.com www.jyothishamithra.com